ಮುತ್ತುರಾಜು*

# ಮುತ್ತತ್ತಿಯ ತಾಮ್ರಶಾಸನ

ಮುತ್ತತ್ತಿ ಗ್ರಾಮವು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಹಲಗೂರು ಹೋಬಳಿಯ ಒಂದು ಹಳ್ಳಿ. ಇಲ್ಲಿ ಮುತ್ತತ್ತಿರಾಯ ಎಂದು ಕರೆಸಿಕೊಳ್ಳುವ ಆಂಜನೇಯ ದೇವಾಲಯವಿದೆ. ಸುಮಾರು ನಾಲ್ಕು ಶತಮಾನಗಳಿಂದಲೂ ಗುಡಿಸಲು ಮತ್ತು ತಗಡಿನ ಶೀಟ್ ಗಳನ್ನುಳ್ಳ ದೇವಾಲಯವಾಗಿದ್ದು ಈಚೆಗೆ ನವೀಕರಣ ಗೊಂಡು ಸುಂದರ ದೇವಾಲಯವಾಗಿದೆ.

ಪ್ರಸ್ತುತ ದೊರೆತಿರುವ ಒಂದು ತಾಮ್ರಶಾಸನವು ಒಂದು ಹಲಗೆಯನ್ನು ಉಳ್ಳದ್ದಾಗಿದೆ. ಹಲಗೆಯ ಎರಡೂ ಕಡೆಗಳಲ್ಲೂ ಬರಹವಿದ್ದು ಒಂದು ಕಡೆ ೨೬ ಸಾಲುಗಳು, ಎರಡನೆಯ ಕಡೆ ೧೭ ಸಾಲುಗಳು ಹೀಗೆ ಒಟ್ಟು ೪೩ ಸಾಲುಗಳಿವೆ. ಈ ತಾಮ್ರಶಾಸನದ ಉದ್ದ ೮.೫ ಅಂಗುಲ, ಅಗಲ ೫.೧ ಅಂಗುಲ ಇದ್ದು ಹಗುರವಾದ ತಾಮ್ರದ ಹಲಗೆಯ ಮೇಲ್ಭಾಗದಲ್ಲಿ ಒಂದು ರಂಧ್ರವನ್ನು ಮಾಡಿದ್ದಾರೆ. ಇದರ ಒಟ್ಟು ತೂಕ ೧೭೫ ಗ್ರಾಂಗಳು.

ಈ ಶಾಸನವು ಮುತ್ತತ್ತಿಯ ದೇವಸ್ಥಾನದ ವಶದಲ್ಲಾಗಲಿ, ಅಥವಾ ಅಲ್ಲಿ ಪೂಜೆ ಮಾಡುವ ತಮ್ಮಡಿಗಳ ವಶದಲ್ಲಾಗಲಿ ಇರದೆ ಕನಕಪುರ ತಾಲ್ಲೂಕಿನ ನಾಯಕನಹಳ್ಳಿಯ ಸಂಜೀವಯ್ಯ ಎಂಬುವರ ವಶದಲ್ಲಿದೆ. ಅವರು ತಮ್ಮ ಪೂರ್ವಿಕರಿಂದ ತಮಗೆ ಇದು ಬಂದಿದ್ದೆಂದು ಹೇಳುತ್ತಾರೆ. ಪ್ರತೀವರ್ಷ ಗೋಕುಲಾಷ್ಟಮಿಯಂದು ನಡೆಯುವ ಜಾತ್ರೆಯಲ್ಲಿ ಈ ಜನಾಂಗದವರದೇ ಪ್ರಧಾನ ಪಾತ್ರವಾಗಿರುತ್ತದೆ.

**ಶಾಸನದ ವಿಷಯ :**

ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಶ್ರೀರಂಗರಾಯರು ಶಿವನಸಮುದ್ರವನ್ನು ಆಳುವ ಸಮಯದಲ್ಲಿ ಎಂದು ಹೇಳಿರುವುದರಿಂದ ಇವನನ್ನು ವಿಜಯನಗರದ ಕೊನೆಯ ಅರಸು ಮೂರನೆಯ ಶ್ರೀರಂಗರಾಯ (ಕ್ರಿ. ಶ. ಸುಮಾರು ೧೬೬೦) ಎಂದು ಲೆಕ್ಕಹಾಕಬಹುದಾಗಿದೆ. ೧೮ನೇ ಶತಮಾನದ ಕೊನೆಯ ೧೯ನೇ ಶತಮಾನದ ಪ್ರಾರಂಭದ ಶಾಸನದ ಲಿಪಿ ಸ್ವರೂಪವು ಇದಕ್ಕೆ ಪೂರಕವಾಗಿದ್ದು ಮುತ್ತತ್ತಿ ದೇವಾಲಯದ ಸ್ವಾಮ್ಯವನ್ನು ತಮ್ಮದೆಂದು ಹೇಳಿಕೊಳ್ಳಲು ಸೃಷ್ಟಿಸಿಕೊಂಡಂತಹ ಶಾಸನವಾಗಿದೆ.

ಈ ಶಾಸನದ ಎರಡನೆಯ ಸಾಲಿನಲ್ಲಿ ಶ್ರೀರಂಗರಾಯನಿಗೂ ದ್ವಾಪರಯುಗಕ್ಕೂ ಸಂಬಂಧ ಕಲ್ಪಿಸಿ ಗೊಂದಲಕ್ಕೀಡು ಮಾಡಿದ್ದಾರೆ. ಆದರೂ ಮುಂದಿನ ಸಾಲುಗಳನ್ನು ಸುಲಭವಾಗಿ ಅರ್ಥೈಸಬಹುದು. ಶ್ರೀರಂಗರಾಯರ ಅರಮನೆಯಲ್ಲಿ ಸ್ವಾಮಿಯು ವ್ಯಾಘ್ರರೂಪದಲ್ಲಿ ಮಲಗಿದ್ದು ನಂತರ ಮೈದುಂಬಿ ಬಂದು ತನ್ನ ನಿಜನಾಮಧೇಯ ಮುತ್ತತ್ತಿರಾಯ ಎಂದು ಹೇಳಿಕೊಂಡು

* ಸಂ. ೧, ೧೨ನೆಯ ಕ್ರಾಸ್, ಸಂಪಂಗಿರಾಮನಗರ, ಬೆಂಗಳೂರು-೫೬೦ ೦೨೭

ತನಗೆ ಮುಳುಪಲ್ಲಕ್ಕಿ ಆಗಬೇಕು ಎಂದು ಕೇಳಲು ಆಗ ಶ್ರೀರಂಗರಾಯನು ತಾನು ಏರಿಬರುತ್ತಿದ್ದಂತಹ ಪಲ್ಲಕ್ಕಿಯನ್ನು ಕೊಟ್ಟು, ಜೊತೆಗೆ ಮುಳುಪಲ್ಲಕ್ಕಿಯನ್ನು ಮಾಡಿಸಿಕೊಟ್ಟು, ಸ್ವಾಮಿಯನ್ನು ಮುತ್ತತ್ತಿಗೆ ಕಳುಹಿಸಿ ಕೊಟ್ಟನು.ನಂತರ ಹಲಗೂರು ನಾರಾಯಣೈಯ್ಯಗೆ ಹೇಳಿ ಸ್ವಾಮಿಯ ದೀಪಾರಾಧನೆಗೆ ಬ್ಯಾಡರಹಳ್ಳಿಯ ಬಳಿ ಹೊಲವನ್ನು ಕೊಡುಗೆ ಹಾಕಿಸಿದನು.

ಆ ಸಮಯದಲ್ಲಿ ಕಾಳಮುತ್ತದಾಸ ಎಂಬುವವನು ಕಕ್ಕೆಯ ಸೊಪ್ಪಿನಿಂದ ಗುಡಿಸಲನ್ನು ಕಟ್ಟಿಕೊಂಡು ಸ್ವಾಮಿಯನ್ನು ಕಾದುಕೊಂಡು ಇದ್ದನು. (೧೯೮೬ನೇ ಇಸವಿಯ ತನಕ ಒಂದೂವರೆ ಅಡಿ ಎತ್ತರದ ಕಕ್ಕೆಮರದ ಮೂರ್ತಿಯನ್ನು ಪೂಜಿಸುತ್ತಿದ್ದರು. ನಂತರ ಶಿವಾರಪಟ್ಟಣದಿಂದ ಕಲ್ಲಿನ ಮೂರ್ತಿಯನ್ನು ಮಾಡಿಸಿ ಪ್ರತಿಷ್ಠಾಪಿಸಲಾಯಿತು.) ಹೀಗೆ ಕಾಳಮುತ್ತದಾಸನು ದೇವರನ್ನು ಕಾಯುತ್ತಿರುವಾಗ ಮಾಯಗಗೌಡ, ಸಿಗೆಗೌಡರ ಹಸುವು ಸ್ವಾಮಿ ಇದ್ದಂತಹ ಹುತ್ತಕ್ಕೆ ಹಾಲು ಯೆರೆಯುತ್ತಾ ಇತ್ತು. ಆಗ ಹಲಗೂರಿನ ಕಾಳೇಗೌಡ, ಕೆಂಚೇಗೌಡ ಎಂಬ ಅಣ್ಣತಮ್ಮಂದಿರು ದನ ಕಾಯುತ್ತಿರುವಾಗ ಹುಚ್ಚುಗಿಕ್ಕಿ ಹಿಡಿ ತಂದು ಈ ಕಾಳಮುತ್ತದಾಸನ ಕೈಗೆ ಕೊಟ್ಟರು. ಆಗ ಸ್ವಾಮಿಯ ಸಕಲಾಚಾರರೆಲ್ಲರು ಮುತ್ತತ್ತಿಯಲ್ಲಿ ಸೇರಿ ಈ ಕೆಂಚೇಗೌಡ ಕಾಳೇಗೌಡ ಎಂಬ ಹೆಸರನ್ನು ತೆಗೆದು ಅವರಿಗೆ ಕಾಳ–ಮುತ್ತ, ಕೆಂಚಮುತ್ತ ಎಂಬ ಹೆಸರನ್ನು ಇಟ್ಟು ಅವರನ್ನು ಕಾಳಮುತ್ತದಾಸನ ಹವಾಲು ಮಾಡಿ ದೇವರ ಪೂಜೆಗೆ ಎಡೆಮಾಡಿ ಇಟ್ಟುಕೊಂಡು ಇರಿ ಎಂದು ನಾಲ್ಕು ಮಂದಿಯ ಸಹಿ ಹಾಕಿಸಿ ಚಪ್ಪೊಡನ್ನು ಬರೆಯಿಸಿ ಕಾಳಮುತ್ತದಾಸನ ಕೈಗೆ ಕೊಟ್ಟರು.

**ಶಾಸನ ಪಾಠ**

೧ ಶ್ರಿ ಮತು ಶ್ರಿ ರಾಮಾನುಜ್ಯಯ ನಮ
೨ ಹ ದೊಪರಾ ಯುಗದಲ್ಲಿ ಸಂಜಿವ ರಾ
೩ ಯ್ಯನು ಬಂದು ಹುತ್ತದಲ್ಲಿ ನಿತ್ತರೂ ಆ ಸ
೪ ಮೆಯ್ಯದಂಲ್ಲಿ ಶ್ರೀರಂಗರಾಯ್ಯರು ಸಿವನ
೫ ಸಮುದ್ರ ಆಳುವಲ್ಲಿ | ಅರಮನೆಯ್ಯಲ್ಲಿ | ಬಲ
೬ ನ ತೊಟ್ಟಿಲ ತೊಲೆಯ್ಯ ಮೆಲೆ ವೆಗ್ರ ಮಲಗಿರ
೭ ಲು ಆ ಸಮಯ್ಯದಲ್ಲಿ | ಸ್ರಿ ರಂಗರಾಯರೂ
೮ ಅಂಲ್ಲಿ | ಯ್ಯಡ ಬಲದಲ್ಲಿ | ಯಿಧ ಸಾ
೯ ಮಾಜಿಕರು ಬಂದು ನೊಡಿದಲ್ಲಿ | ಶ್ವಮಿ ಮ್ಯೆ
೧೦ ಮಂಬಿ ಬಂದು | ನಾನು ಮುತ್ತತ್ತಿರಾಯ್ಯ
೧೧ ಯ್ಯಂದು | ತಮ ನಾಮದಯ್ಯವಂನು ಹೆಳಿ
೧೨ ಕೊಂಡರೂ | ಆ ಸಮೆಯ್ಯದಲ್ಲಿ ಸ್ರಿರಂಗರಾ
೧೩ ಯ್ಯರು ಶ್ವಮಿ ನಿಇು ಬಂದ ಬಗೆಯೆನೆಂದು ಬಿ
೧೪ ಂನ್ಯೆಸಿದಲ್ಲಿ ಶ್ವಮಿ ನಮಗೆ ಮುಳುಪಂಲ
೧೫ ಕಿ ಆಗಬೆಕೂಯಂದು ಕೆಳಿದಲ್ಲಿ ಆ ಕ್ಷಣ

೧೬ ದಲ್ಲಿ ಶ್ರೀ ರಂಗರಾಯ್ಯರು ತಾಉಯೆ

೧೭ ರಿ ಬರುವ ಪಂಲ್ಲಕ್ಕಿನೆ ಕೊಟು| ಮುಳು

೧೮ ಪಲ್ಲಕ್ಕಿಯ್ಯನು ಮಾಡಿಸಿ ಕೊಟು | ಶ್ವಮಿಯ

೧೯ ವರ ಮುಂತತಿಗೆ ಕಳುಹಿದರೂ |

೨೦ ಆ ಸಮೆಯಾದಲ್ಲಿ ಹಲಗೂರು ನಾರಣ್ಯೈಯ್ಯಗೆ

೨೧ ಹೆಳಿಸಿ ಶ್ವಮಿಯ್ಯವರ ದಿಪರಾದನೆಗೆ ಬ್ಯೈ

೨೨ ಡರ ಹಳ್ಳಿಯ್ಯಲಿ ಹೊಲ ಕೊಡುಗೆ ಹಾಕಿ

೨೩ ದು ಶ್ವಮಿಯ್ಯವರು ಹುತ್ತದಂಲ್ಲಿಯಿರು

೨೪ ವಾಗ್ಗೆ ಮಾಯ್ಯಗಗೌಡ ಸಿಗೆಗೌಡನ ಹ

೨೫ ಸು ಹುತ್ತಕ್ಕೆ ಹಲುಯುರೆ

೨೬ ಯುತಯಿತು ಆಗ್ಗೆ ಕಾಳಮುತ್ತ

## ಅದೇ ಹಲಗೆಯು ಹಿಂಭಾಗ

೨೭ ದಾಸನು ಕಂಕೆಸೊಪ್ಪು | ಗುಡುಲು

೨೮ ಕಟಿಕೊಂಡು ಶ್ವಮಿಯ್ಯ | ಕಾದುಕೊಂ

೨೯ ಡು | ಯಿದ್ದನು ಹಲಗೂರ ಕಾ

೩೦ ಳಿಗೌಡ | ಕೆಂಚೆಗೌಡ ಅಂಣ ತಂಮದಿ

೩೧ ರೂ ದನಕಾಯುವಂಲ್ಲಿ ಹುಚುಗ್ಗಿಕ್ಕಿ ಹಿ

೩೨ ಡಿ ತಂದು | ಕಾಳಮುಂತದಾಸನ ಕೈವಸ

೩೩ ಕ್ಕೆ ಕೊಟರು ಆಗ ಶ್ವಮಿ ಸಕಲಾಚಾ

೩೪ ರೂ ಮುತಾತ್ತಿಯಲ್ಲಿ ಕೂಡಿ ಕೆಂ

೩೫ ಚ್ಚಿಗೌಡ ಕಾಳಿಗೌಡಯಂಬ ಹೆಸರ ಬಿ

೩೬ ಟು ಕಾಳಮುಂತ್ತ ಕೆಂಚ್ಚ ಮುತ್ತಯಂ

೩೭ ಬ ಹೆಸರಿಟ್ಟು ಯಿ ಕಾಳಮುತ್ತದಾಸ

೩೮ ನ ಹವಲು ಮಾಡಿ ಯಿ ದೆವ ಪುಜೆ ಮು

೩೯ ರು ಮುರುಯೆಡೆಯಾಗಿ ಯಿದುಕೊಂಡು

೪೦ ಯಿರಿಯಂದು ನಾಕ್ಲು ಮಂದಿ

೪೧ ಯಶಂ ಹಾಕಿ ಸನಪತಿಗಳು ಕೂಡಿ

೪೨ ಯಿ ಚಂಪೊಡು ಬರಸಿ ಕಾಳಮುಂತ ದಾ

೪೩ ಸನ ಕೈಗೆ ಕೊಂಟರೂ

ಈ ಮುತ್ತತ್ತಿರಾಯನಿಗೆ ಸಂಬಂಧಿಸಿದ ಜಾನಪದ ಹಾಡುಗಳಲ್ಲೊಂದರಲ್ಲಿ 'ರಂಗರಾಜರ ನಡುವೆ' ಎಂಬ ಸಾಲು ಬರುತ್ತದೆ. ಇದು ಶ್ರೀ ರಂಗರಾಯನಿಗೂ ಈ ಕ್ಷೇತ್ರಕ್ಕೂ ನಡೆದಿರಬಹುದಾದಂತಹ ಘಟನೆಯನ್ನು ಪುಷ್ಟೀಕರಿಸುತ್ತದೆ.

ಇದೇ ಸ್ಥಳದಲ್ಲಿ ಐದು ಸಾಲಿನ ಗ್ರಂಥಾಕ್ಷರವುಳ್ಳ, ವೀರಗಲ್ಲು ದೊರೆತಿದ್ದು ಮೊಸಳೆಯ ಜೊತೆಗೆ ಹೋರಾಟದ ಚಿತ್ರಣವಿದೆ. ಇದು ಹೊಯ್ಸಳರ ಕಾಲಕ್ಕೆ ಸೇರಿದ್ದಾಗಿದ್ದು ಮುತ್ತತ್ತಿಯು ೧೨ನೇ ಶತಮಾನಕ್ಕಿಂತ ಮುಂಚಿನಿಂದಲೂ ಪ್ರಸಿದ್ಧವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಶಾಸನವಲ್ಲದೆ ವಿಜಯನಗರ ಕಾಲಕ್ಕೆ ಸೇರಿರಬಹುದಾದಂತಹ ಎರಡು ವೀರಗಲ್ಲುಗಳು ದೊರೆತಿವೆ.*

* ಈ ಲೇಖನವನ್ನು ಸಿದ್ಧಪಡಿಸಲು ಸಹಕಾರ ನೀಡಿದ ಪೂಜ್ಯ ಗುರುಗಳಾದ ಡಾ॥ ದೇವರಕೊಂಡಾರೆಡ್ಡಿ ಅವರಿಗೆ ಕೃತಜ್ಞನಾಗಿದ್ದೇನೆ.